# ಕರ್ನಾಟಕ ವಿಧಾನ ಪರಿಷತ್ತು

1) **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1999
2) **ಸದಸ್ಯರ ಹೆಸರು** : ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3) **ಉತ್ತರಿಸಬೇಕಾದ ದಿನಾಂಕ** : 24-03-2021
4) **ಉತ್ತರಿಸಬೇಕಾದ ಸಚಿವರು** : ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮೀನುಗಾರಿಕಾ ವಲಯವನ್ನು ಅಭಿವೃದ್ಧಿ ಗೊಳಿಸುವ ಹಾಗೂ ಮತ್ಸ್ಯಾಹಾರವನ್ನು ಜನಪ್ರಿಯ ಗೊಳಿಸಲು ಮೀನುಗಾರಿಕೆ ಅಭಿವೃದ್ಧಿ ನಿಗಮವು ಹಮ್ಮಿಕೊಂಡಿರುವ ಕ್ರಿಯಾ ಯೋಜನೆಗಳು ಯಾವುವು; | ಮೀನುಗಾರಿಕೆ ವಲಯವನ್ನು ಅಭಿವೃದ್ಧಿಗೊಳಿಸುವ ಹಾಗೂ ಮತ್ಸ್ಯಾಹಾರವನ್ನು ಜನಪ್ರಿಯಗೊಳಿಸಲು ಮೀನುಗಾರಿಕೆ ಅಭಿವೃದ್ಧಿ ನಿಗಮವು ಹಮ್ಮಿಕೊಂಡಿರುವ ಕ್ರಿಯಾ ಯೋಜನೆಗಳು ಈ ಕೆಳಗಿನಂತಿದೆ:<br><br>1) ನಿಗಮವು ರಾಜ್ಯದ ಮೀನುಗಾರಿಕೆ ಬಂದರುಗಳಲ್ಲಿ ಮಂಜುಗಡ್ಡೆ ಸ್ಥಾವರಗಳನ್ನು ನಿರ್ಮಿಸಿ, ಒಟ್ಟು ದಿನವೊಂದರ 220 ಟನ್ ಸಾಮರ್ಥ್ಯದ ಮಂಜುಗಡ್ಡೆಯನ್ನು ಸರಬರಾಜು ಮಾಡುತ್ತಿದೆ.<br><br>2) ನಿಗಮವು ರಾಜ್ಯದ ಮೀನುಗಾರಿಕೆ ಬಂದರುಗಳಲ್ಲಿ ಡೀಸೆಲ್ ಬಂಕುಗಳನ್ನು ನಿರ್ಮಿಸಿ ಮೀನುಗಾರಿಕೆ ಬೋಟುಗಳಿಗೆ ಡೀಸೆಲನ್ನು ಸರಬರಾಜು ಮಾಡುತ್ತಿದೆ.<br><br>3) ನಿಗಮವು ಉತ್ತರ ಕನ್ನಡ ಜಿಲ್ಲೆಯ ಭಟ್ಕಳ, ಹೊನ್ನಾವರ ಹಾಗೂ ತದಡಿ ಮೀನುಗಾರಿಕೆ ಬಂದರಿನಲ್ಲಿ ಪರ್ಸೀನ್ ಬೋಟುಗಳು ಹಿಡಿದು ತಂದ ಮೀನನ್ನು ನಿಗಮದ ಮುಖಾಂತರ ಮಾರಾಟ ಮಾಡಿ ಮೀನುಗಾರರಿಗೆ ಉತ್ತಮ ಬೆಲೆಯನ್ನು ನೀಡಲು ಕ್ರಮವಹಿಸಿದೆ.<br><br>4) ನಿಗಮವು ರಾಜ್ಯದ ಒಳನಾಡು ಪ್ರದೇಶಕ್ಕೆ ತಾಜಾ ಹಾಗೂ ಶೀಥಲೀಕೃತ ಮೀನು ಸರಬರಾಜು ಮಾಡಲು ಶೀಥಲ ಸರಪಣಿಯನ್ನು ಸ್ಥಾಪಿಸಿದೆ.<br><br>5) ನಿಗಮವು ರಾಜ್ಯದಲ್ಲಿ ಒಟ್ಟು 21 ಹವಾನಿಯಂತ್ರಿತ ಮೀನು ಮಾರಾಟ ಮಳಿಗೆ ಮತ್ಸ್ಯದರ್ಶಿನಿ ಉಪಹಾರ ಗೃಹಗಳನ್ನು ಸ್ಥಾಪಿಸಿ ಸಾರ್ವಜನಿಕರಿಗೆ ಉತ್ತಮ ಗುಣಮಟ್ಟದ ಮೀನು ಹಾಗೂ ಮೀನಿನ ಉತ್ಪನ್ನಗಳನ್ನು ಸರಬರಾಜು ಮಾಡಲಾಗುತ್ತಿದೆ.<br><br>6) ನಿಗಮವು ಮಂಗಳೂರಿನಲ್ಲಿ ಯೂರೋಪಿಯನ್ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವ ಪರವಾನಿಗೆ ಹೊಂದಿರುವ ಆಧುನಿಕ ಮೀನು ಸಂಸ್ಕರಣಾ ಸ್ಥಾವರವನ್ನು ನಿರ್ಮಿಸಿದೆ.<br><br>7) ನಿಗಮವು ಮಂಗಳೂರಿನಲ್ಲಿ ತಾಜಾ ಮೀನನ್ನು ಅರಬ್ ದೇಶಗಳಿಗೆ ರಫ್ತು ಮಾಡುವ ಚಿಲ್ಡ್ ಫಿಶ್ ಸಂಸ್ಕರಣಾ ಘಟಕವನ್ನು ನಿರ್ಮಿಸಿದೆ.<br><br>8) ನಿಗಮದಿಂದ ಅಲಂಕಾರಿಕಾ ಮೀನುಗಳ ಮಾರಾಟ ಮತ್ತು ಇದಕ್ಕೆ ಸಂಬಂಧಪಟ್ಟ ಸಲಕರಣೆಗಳನ್ನು ಮಾರಾಟ ಮಾಡಲಾಗುತ್ತಿದೆ. |

| | | |
|---|---|---|
| | | 9) ನಿಗಮದಿಂದ ಮೀನು ಆಹಾರ ಮತ್ತು ಮೀನೆಣ್ಣೆ ಮತ್ತು ಮೀನು ಸಂಸ್ಕರಣೆಗೆ ಬೇಕಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ.<br><br>10) ಮೀನುಗಾರಿಕೆ ಇಲಾಖೆಯು ಮತ್ಸ್ಯ ಜೋಪಾಸನೆ ಯೋಜನೆಯಡಿ ನೀಡಿದ ಅನುದಾನದಲ್ಲಿ ರಾಜ್ಯದ 20 ಮೀನು ಮಾರುಕಟ್ಟೆ ಸ್ಥಳಗಳಲ್ಲಿ 2 ಟನ್ ಸಾಮರ್ಥ್ಯದ ಶೀಥಲೀಕರಣ ಘಟಕ ನಿರ್ಮಾಣ ಮಾಡಲಾಗಿದೆ.<br><br>11) ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ/ನಬಾರ್ಡ್ ಆರ್‌ಐಡಿಎಫ್ ಯೋಜನೆ/ಎನ್‌ಎಫ್‌ಡಿಬಿ ಯೋಜನೆ/ರಾಜ್ಯ ಸರ್ಕಾರದ ಯೋಜನೆ ಅಡಿ ನಿಗಮದಿಂದ ಸುಸಜ್ಜಿತ ಮೀನು ಮಾರುಕಟ್ಟೆಗಳ ನಿರ್ಮಾಣ.<br><br>12) ತದಡಿ ಮೀನುಗಾರಿಕಾ ಬಂದರಿನಲ್ಲಿ ಐರೋಪ್ಯ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವ ಪರವಾನಿಗೆ ಹೊಂದಿರುವ ಸಮುದ್ರೋತ್ಪನ್ನ ರಫ್ತು ಸಂಸ್ಕರಣಾ ಘಟಕ ನಿರ್ಮಾಣ.<br><br>13) 2021-22ನೇ ಸಾಲಿನ ರಾಜ್ಯ ಬಜೆಟ್‌ನಲ್ಲಿ 15 ಸುಸಜ್ಜಿತ ಮೀನು ಮಾರುಕಟ್ಟೆಗಳ ನಿರ್ಮಾಣ, 12 ಮತ್ಸ್ಯದರ್ಶಿನಿ ಉಪಹಾರ ಗೃಹಗಳು, 10 ಸಂಚಾರಿ ಮೀನು ಉಪಹಾರ ಗೃಹಗಳು ಹಾಗೂ 10 ಸಂಚಾರಿ ಮೀನು ಮಾರಾಟ ಮಳಿಗೆಗಳನ್ನು ನಿರ್ಮಿಸುವ ಬಗ್ಗೆ ನಿಗಮಕ್ಕೆ ರೂ30.00 ಕೋಟಿ ಅನುದಾನವನ್ನು ಒದಗಿಸಲು ಘೋಷಿಸಲಾಗಿದೆ. |
| ಆ) | ಕಳೆದ ಮೂರು ವರ್ಷಗಳಲ್ಲಿ ಎಷ್ಟು ಜನ ಫಲಾನುಭವಿಗಳಿಗೆ ನಿಗಮದ ಯೋಜನೆಯ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸಲಾಗಿದೆ; | ನಿಗಮದಿಂದ ಫಲಾನುಭವಿ ಆಧಾರಿತ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿರುವುದಿಲ್ಲ. ನಿಗಮದಿಂದ ಲೈಸೆನ್ಸ್ ಆಧಾರದಲ್ಲಿ 11 ಜನ ಫಲಾನುಭವಿಗಳು ಮೀನು ಮಾರಾಟ ಮಳಿಗೆ ಮತ್ತು ಮತ್ಸ್ಯದರ್ಶಿನಿ ಮೀನು ಉಪಹಾರ ಗೃಹಗಳನ್ನು ನಡೆಸಲು ಅನುಮತಿ ನೀಡಿದೆ ಹಾಗೂ 27 ಫಲಾನುಭವಿಗಳು ನಿಗಮದಿಂದ ಏಜೆನ್ಸಿ ಪಡೆದು ಮತ್ಸ್ಯದರ್ಶಿನಿ ಮಳಿಗೆಗಳನ್ನು ನಡೆಸುತ್ತಿದ್ದಾರೆ. |
| ಇ) | ಮೀನುಗಾರಿಕಾ ವಲಯವನ್ನು ಅಭಿವೃದ್ಧಿಪಡಿಸಲು ಸರ್ಕಾರ ಮೀಸಲಿಟ್ಟಿರುವ ಅನುದಾನ ಎಷ್ಟು; | 2020-21ನೇ ಸಾಲಿನ ಆಯವ್ಯಯದಲ್ಲಿ ರೂ.294.05 ಕೋಟಿ ಅನುದಾನವನ್ನು ಮೀನುಗಾರಿಕೆ ವಲಯದ ಅಭಿವೃದ್ಧಿಗೆ ನಿಗದಿಪಡಿಸಲಾಗಿದೆ. |
| ಈ) | ಮಹಾನಗರ ಪ್ರದೇಶಗಳಲ್ಲಿ ಜನಪ್ರಿಯತೆಯನ್ನು ಗಳಿಸಿಕೊಂಡಿರುವ ನಿಗಮದ ಮತ್ಸ್ಯದರ್ಶಿನಿ ಹೋಟೆಲ್‌ಗಳನ್ನು ಬೇಡಿಕೆ ಇರುವ ಜಿಲ್ಲಾ ಕೇಂದ್ರಗಳಲ್ಲಿ ಪ್ರಾರಂಭಿಸುವ ಬಗೆಗಿನ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | **ಹೌದು.** |

| | | |
|---|---|---|
| ಉ) | ಇದ್ದಲ್ಲಿ, ನಿಗಮದ ಮೂಲಕ ಮತ್ಸ್ಯೋತ್ಪನ್ನಗಳನ್ನು ಜನಪ್ರಿಯಗೊಳಿಸುವ ಹಾಗೂ ಆಸಕ್ತರಿಗೆ ಉದ್ಯೋಗ ಕಲ್ಪಿಸಿ ಕೊಡುವಲ್ಲಿ ನೆರವಾಗುವ ಸರಳ ಯೋಜನೆಗಳಾವುವು? (ವಿವರ ನೀಡುವುದು) | ಆಸಕ್ತರಿಗೆ ಉದ್ಯೋಗ ಕಲ್ಪಿಸಿಕೊಡುವ ನಿಟ್ಟಿನಲ್ಲಿ ಮತ್ಸ್ಯದರ್ಶಿನಿ ಉಪಹಾರ ಗೃಹಗಳನ್ನು ಮತ್ತು ಮೀನು ಮಾರಾಟ ಮಳಿಗೆಗಳನ್ನು ತೆರೆಯಲು ಏಜೆನ್ಸಿ ನೀಡಲಾಗುವುದು. |

ಸಂಖ್ಯೆ: ಪಸಂಮೀ ಇ-124 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ, ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು